# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 331 |
| ಸದಸ್ಯರ ಹೆಸರು | ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸುವವರು | ಮಾನ್ಯ ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು. |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಅಧಿವೇಶನದಲ್ಲಿ ಮಾನ್ಯ ಅರಣ್ಯ ಸಚಿವರು ಕೆಲವು ವೃತ್ತಗಳಲ್ಲಿ ಸಮಿತಿಯ ವರದಿಯನ್ನು ವೃತ್ತದ ಮುಖ್ಯಸ್ಥರು ಪಾಲನೆ ಮಾಡದಿರುವ ಬಗ್ಗೆ ತಿಳಿಸಿರುವುದು ನಿಜವೇ; ಪಾಲನೆ ಮಾಡದಿರುವವರ ಮೇಲೆ ಯಾವ ಕ್ರಮ ಜರುಗಿಸಲಾಗಿದೆ. (ಸಂಪೂರ್ಣ ಮಾಹಿತಿ ಒದಗಿಸುವುದು) | ಅರಣ್ಯ ಇಲಾಖೆಯ ವಿವಿಧ ವೃಂದದ ಜೇಷ್ಠತಾ ಪಟ್ಟಿಗಳಲ್ಲಿರುವ ನ್ಯೂನತೆಗಳನ್ನು ಸರಿಪಡಿಸಲು ಸರ್ಕಾರ ರಚಿಸಿದ (ನೌಕರ ಸಂಘದ ಪ್ರತಿನಿಧಿಗಳನ್ನು ಹೊಂದಿರುವ) ಸಮಿತಿಯ ವರದಿ ಹಾಗೂ ಸರ್ಕಾರದ ನಿರ್ದೇಶನ ಮತ್ತು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ರವರು ಜೇಷ್ಠತಾ ಪಟ್ಟಿಗಳನ್ನು ತಯಾರಿಸುವ ಕುರಿತು ನೀಡಿರುವ ಕಟ್ಟುನಿಟ್ಟಾದ ಸೂಚನೆಗಳನ್ನು ಅನುಸರಿಸಿ, ಎಲ್ಲಾ ವೃತ್ತಗಳ ಮುಖ್ಯಸ್ಥರು ಜೇಷ್ಠತಾ ಪಟ್ಟಿಗಳನ್ನು ತಯಾರಿಸಿ ಪ್ರಕಟಿಸಿರುತ್ತಾರೆ. ಈ ಎಲ್ಲಾ ಜೇಷ್ಠತಾ ಪಟ್ಟಿಗಳನ್ನು ಅರಣ್ಯ ಇಲಾಖೆಯ ಜಾಲತಾಣದಲ್ಲಿ ಪ್ರಕಟಿಸಲಾಗಿರುತ್ತದೆ.<br>ಈ ಹಿನ್ನೆಲೆಯಲ್ಲಿ ಸಮಿತಿಯ ವರದಿಯನ್ನು ಎಲ್ಲಾ ವೃತ್ತಗಳ ಮುಖ್ಯಸ್ಥರು ಪಾಲನೆ ಮಾಡಿರುವುದರಿಂದ, ಅವರ ಮೇಲೆ ಕ್ರಮ ಜರುಗಿಸುವ ಪ್ರಮೇಯ ಉದ್ಭವಿಸುವುದಿಲ್ಲ.<br>ಅಂತಿಮ ಜೇಷ್ಠತಾ ಪಟ್ಟಿಯಿಂದ ಬಾಧಿತ ಅಧಿಕಾರಿ/ನೌಕರರು ಸಕ್ಷಮ ನ್ಯಾಯಾಧೀಕರಣದ ಮುಂದೆ ತಮ್ಮ ಮೇಲ್ಮನವಿಯನ್ನು ಸಲ್ಲಿಸಲು ಅವಕಾಶವಿರುತ್ತದೆ. |
| ಆ) | ಸರ್ಕಾರದ ಪತ್ರ ಸಂಖ್ಯೆ; ಅಪಜೀ: 17 ಆಇವಿ: 2019, ದಿನಾಂಕ: 05.07.2019 ರಲ್ಲಿ 2017ರ ನಿಯಮಗಳಂತೆ ಜೇಷ್ಠತಾ ಪಟ್ಟಿಯನ್ನು ಮರು ಪ್ರಕಟಿಸುವಾಗ ತಪ್ಪು/ ಅನುಷ್ಠಾನದಲ್ಲಿ ವಿಫಲತೆ ಕಂಡು ಬಂದಲ್ಲಿ, ಸಿಐಡಿ ತನಿಖೆ ಜರುಗಿಸಲಾಗುವುದೆಂದು ತಿಳಿಸಿರುವುದು ನಿಜವೇ; ಹಾಗಿದ್ದಲ್ಲಿ ಹಲವು ವೃತ್ತಗಳಲ್ಲಿ ಅಧಿಕಾರಿಗಳು ಲೋಪವೆಸಗಿರುವುದು ಸರ್ಕಾರದ ಗಮನಕ್ಕೆ ಬಂದರೂ ಸಹ ಸಿಐಡಿ ತನಿಖೆ ಜರುಗಿಸದಿರಲು ಕಾರಣವೇನು; ತನಿಖೆ ಜರುಗಿಸಲು ಕ್ರಮ ವಹಿಸಲಾಗುವುದೇ?. | ಈ ವಿಷಯದಲ್ಲಿ ಸರ್ಕಾರವು ಸಿ.ಐ.ಡಿ.ಯಿಂದ ಯಾವುದೇ ತನಿಖೆಗೆ ಆದೇಶ ನೀಡಿರುವುದಿಲ್ಲ. ಶ್ರೀ ಬಿ.ಕೆ ಪವಿತ್ರ-2 ರವರ ಪ್ರಕರಣದಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯದ ಆದೇಶದ ಪ್ರಕಾರ ಎಲ್ಲಾ ವೃಂದದ ಜೇಷ್ಠತಾ ಪಟ್ಟಿಗಳು ಪುನರ್ ಪರಾಮರ್ಶೆಗೆ ಒಳಪಟ್ಟು ಪರಿಷ್ಕರಣೆ ಆಗಬೇಕಾದ ಹಿನ್ನೆಲೆಯಲ್ಲಿ ಉಪ ವಲಯ ಅರಣ್ಯಾಧಿಕಾರಿ ಹಾಗೂ ಲಿಪಿಕ ನೌಕರ ವೃಂದದ ಅಂತಿಮ ಜೇಷ್ಠತಾ ಪಟ್ಟಿಯು ವ್ಯರ್ಥ/ನಿರರ್ಥಕ (infructuous) ಆಗಿರುತ್ತದೆ. ಆದ್ದರಿಂದ ಅಕ್ರಮ ಎಸಗಿರುವರೆಂದು ತಿಳಿಸಲಾದ ಅಧಿಕಾರಿಗಳ ವಿರುದ್ಧ ಸಿ.ಐ.ಡಿ.ತನಿಖೆ ಜರುಗಿಸುವ ಪ್ರಶ್ನೆ ಉದ್ಭವಿಸುವುದಿಲ್ಲ. |

| | | |
|---|---|---|
| ಇ) | ಉಪ ವಲಯ ಅಧಿಕಾರಿ ಹುದ್ದೆಯ ರಾಜ್ಯ ಮಟ್ಟದ ಸಂಯೋಜಿತ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಪ್ರಮೇಯ ಉದ್ಭವಿಸುವು ದಿಲ್ಲವೆಂದು ಪರಿಷತ್ತಿಗೆ ಮಾಹಿತಿ ನೀಡಿರುವ ಅಧಿಕಾರಿಯ ಮೇಲೆ ಯಾವ ಕ್ರಮ ಜರುಗಿಸಲಾಗಿದೆ: | ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು 1957ರ ನಿಯಮ 10 ರನ್ವಯ ಸಂಬಂಧಿಸಿದ ವೃಂದಗಳ ಜೇಷ್ಠತಾ ಪಟ್ಟಿಯನ್ನು ಸಕ್ಷಮ ಪ್ರಾಧಿಕಾರವು ತಯಾರಿಸಿ ಪ್ರಕಟಿಸಬೇಕು. ಉಪ ವಲಯ ಅರಣ್ಯಾಧಿಕಾರಿ ವೃಂದದ ಜೇಷ್ಠತಾ ಪಟ್ಟಿಯನ್ನು ತಯಾರಿಸಿ ಪ್ರಕಟಿಸಲು ವೃತ್ತ ಮಟ್ಟದ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ/ಅರಣ್ಯ ಸಂರಕ್ಷಣಾಧಿಕಾರಿಗಳು ಸಕ್ಷಮ ಪ್ರಾಧಿಕಾರವಾಗಿರುತ್ತಾರೆ. ಅದರಂತೆ, ಸಕ್ಷಮ ಪ್ರಾಧಿಕಾರಿಗಳಾದ ಆಯಾ ವೃತ್ತಗಳ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು/ಅರಣ್ಯ ಸಂರಕ್ಷಣಾಧಿಕಾರಿಗಳು ಜೇಷ್ಠತಾ ಪಟ್ಟಿಗಳನ್ನು ಅಧಿಸೂಚಿಸಿರುವುದರಿಂದ ಉಪ ವಲಯ ಅರಣ್ಯಾಧಿಕಾರಿಗಳ ರಾಜ್ಯಮಟ್ಟದ ಸಂಯೋಜಿತ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಪ್ರಶ್ನೆ ಉದ್ಭವಿಸುವುದಿಲ್ಲ. ಹೀಗಾಗಿ ಅಧಿಕಾರಿಗಳ ವಿರುದ್ಧ ಕ್ರಮ ಜರುಗಿಸುವ ಪ್ರಶ್ನೆ ಉದ್ಭವಿಸುವುದಿಲ್ಲ.<br><br>ಆದಾಗ್ಯೂ ರಾಜ್ಯಮಟ್ಟದ ಸಂಯೋಜಿತ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ ಕಾನೂನು ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ಇವರ ಅಭಿಪ್ರಾಯವನ್ನು ಕೋರಲಾಗಿದ್ದು, ಸದರಿ ಇಲಾಖೆಗಳು ನೀಡುವ ಅಭಿಪ್ರಾಯವನ್ನು ಪರಿಶೀಲಿಸಿ ಕ್ರಮವಹಿಸಲಾಗುತ್ತದೆ. |
| ಈ) | ಪೋಷಕ ವೃಂದದ ಜೇಷ್ಠತಾ ಪಟ್ಟಿಯನ್ನು ರಾಜ್ಯ ಮಟ್ಟದಲ್ಲಿ ಸಂಯೋಜಿಸಿ ಪ್ರಕಟಿಸುವ ಪೂರ್ವದಲ್ಲಿಯೇ ಅಂತಿಮಗೊಳಿಸಿರುವ ವಲಯ ಅರಣ್ಯ ಅಧಿಕಾರಿ ಜೇಷ್ಠತಾ ಪಟ್ಟಿಯನ್ನು ಸರ್ಕಾರ ರದ್ದುಪಡಿಸಿ ಹೊಸದಾಗಿ ಪ್ರಕಟಿಸುವುದೇ: ಹಾಗಿದ್ದಲ್ಲಿ, ಕೈಬಿಟ್ಟಿರುವ ಅರ್ಹ ನೌಕರರ ಜೇಷ್ಠತಾ ಪಟ್ಟಿಗೆ ಸೇರಿಸಲು ಕ್ರಮ ಜರುಗಿಸಲಾಗುವುದೇ: | |

ಸಂಖ್ಯೆ: ಅಪಜೀ 46 ಅಪಸೇ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು.